# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1050
ಸದಸ್ಯರ ಹೆಸರು : ಶ್ರೀ ಕೆ.ಸಿ.ಕೊಂಡಯ್ಯ (ಸ್ಥಳೀಯ ಸಂಸ್ಥೆಗಳು)
ಉತ್ತರಿಸುವ ದಿನಾಂಕ : 21/09/2021
ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯವು "ಜೈಲಿನಲ್ಲಿರುವ ಮಹಿಳೆಯರು" ಎಂಬ ಶೀರ್ಷಿಕೆಯಡಿ ಸಲ್ಲಿಸಿರುವ ವರದಿಯ ಶಿಫಾರಸ್ಸುಗಳನ್ನು ಜಾರಿಗೊಳಿಸಲು ರಾಜ್ಯ ಸರ್ಕಾರಕ್ಕೆ ಪ್ರಸ್ತಾವನೆ ಬಂದಿದೆಯೇ: | ಹೌದು |
| ಆ) | ಬಂದಿದ್ದಲ್ಲಿ ವರದಿಯ ಸಾರಾಂಶಗಳೇನು; ಮತ್ತು ಈ ಸಂಬಂಧ ಕೈಗೊಂಡಿರುವ ಕ್ರಮಗಳೇನು? | ಕೇಂದ್ರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯವು "ಜೈಲಿನಲ್ಲಿರುವ ಮಹಿಳೆಯರು" ಎಂಬ ಶೀರ್ಷಿಕೆಯಡಿ ಸಲ್ಲಿಸಿರುವ ವರದಿಯ ಶಿಫಾರಸ್ಸುಗಳನ್ವಯ ಸರ್ಕಾರವು ಕೈಗೊಂಡಿರುವ ಕ್ರಮಗಳ ವರದಿಯನ್ನು ದಿನಾಂಕ:10.08.2021 ರಂದು ಕೇಂದ್ರ ಸರ್ಕಾರಕ್ಕೆ ಕಳುಹಿಸಲಾಗಿದೆ. (ವರದಿಯ ಸಾರಾಂಶಗಳು ಹಾಗೂ ಕೈಗೊಂಡ ಕ್ರಮಗಳನ್ನು ಅನುಬಂಧದಲ್ಲಿ ನೀಡಲಾಗಿದೆ.) |

ಸಂಖ್ಯೆ: ಹೆಚ್ ಡಿ 132 ಪಿಆರ್ಎ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು

# ಅನುಬಂಧ

## ಕೇಂದ್ರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯವು "ಜೈಲಿನಲ್ಲಿರುವ ಮಹಿಳೆಯರು" ಕುರಿತ ವರದಿಯ ಶಿಫಾರಸ್ಸುಗಳನ್ನು ಜಾರಿಗೊಳಿಸಲು ಕೈಗೊಂಡ ಕ್ರಮಗಳು.

| ಕ್ರ ಸಂ. | ಶಿಫಾರಸ್ಸು | ತೆಗೆದುಕೊಂಡ ಕ್ರಮಗಳು |
|---|---|---|
| 1. | ಮಾದರಿ ಕಾರಾಗೃಹ ಕೈಪಿಡಿ –2016 ಅನ್ನು ರಾಜ್ಯ ಸರ್ಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಅಳವಡಿಸಿ ಅನುಷ್ಠಾನಗೊಳಿಸುವ ಬಗ್ಗೆ. | ಕೇಂದ್ರ ಗೃಹ ಮಂತ್ರಾಲಯ, ಭಾರತ ಸರ್ಕಾರದ ನಿರ್ದೇಶನದ ಅನುಸಾರ ಮಾದರಿ ಕಾರಾಗೃಹ ಕೈಪಿಡಿ – 2016 ರನ್ವಯ, ಕರ್ನಾಟಕ ಕಾರಾಗೃಹ ಮತ್ತು ಸುಧಾರಣೆ ಸೇವೆ ಕೈಪಿಡಿ – 2021 ರ ಕರಡು ಪ್ರತಿಯನ್ನು ತಯಾರಿಸಿದ್ದು, ರಾಜ್ಯ ಸರ್ಕಾರದ ಪರಿಶೀಲನೆಯಲ್ಲಿದೆ. |
| 2. | ಕಾರಾಗೃಹಗಳ ನಿಯಮಿತ ಮತ್ತು ಸ್ವತಂತ್ರ ಪರಿಶೀಲನೆ | **ಕಾರಾಗೃಹಗಳಲ್ಲಿ ಈ ಕೆಳಗಿನಂತೆ ಸ್ವತಂತ್ರ ಪರಿಶೀಲನೆ ಕೈಗೊಳ್ಳಲಾಗುತ್ತಿರುತ್ತದೆ:**<br>1. ಸ್ಥಳೀಯ ನ್ಯಾಯಾಧೀಶರುಗಳು ಮತ್ತು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯರುಗಳು ಆಗಿಂದಾಗ್ಗೆ ಕಾರಾಗೃಹಗಳಿಗೆ ಭೇಟಿ ನೀಡಿ ಕಾರಾಗೃಹಗಳಲ್ಲಿ ನೀಡಲಾಗುವ ಸೌಲಭ್ಯಗಳ ಕುರಿತು ಪರಿಶೀಲನೆ ಕೈಗೊಳ್ಳುತ್ತಿರುತ್ತಾರೆ.<br>2. ಕರ್ನಾಟಕ ಕಾರಾಗೃಹಗಳ ನಿಯಮಗಳು 1974 ರನ್ವಯ ಸಂದರ್ಶಕರ ಮಂಡಳಿಗಳು ಅಸ್ತಿತ್ವದಲ್ಲಿದ್ದು, ಸದರಿ ಸಂದರ್ಶಕರ ಮಂಡಳಿಗಳಲ್ಲಿ ಅಧಿಕಾರಿ ಸದಸ್ಯರುಗಳಾದ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಪೊಲೀಸ್ ಆಯುಕ್ತರು / ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಜಿಲ್ಲಾ ಶಸ್ತ್ರಚಿಕಿತ್ಸಕರು, ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ ಹಾಗೂ ಸ್ಥಳೀಯ ಶಾಸಕರನ್ನೊಳಗೊಂಡಂತೆ ಅಧಿಕಾರೇತರ ಸದಸ್ಯರುಗಳು ಕಾರಾಗೃಹಗಳಲ್ಲಿ ಪರಿಶೀಲನೆ ನಡೆಸುತ್ತಿರುತ್ತಾರೆ.<br>3. ರಾಷ್ಟ್ರೀಯ ಮತ್ತು ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರುಗಳು ಹಾಗೂ ಸದಸ್ಯರುಗಳು ಕಾರಾಗೃಹಗಳಿಗೆ ಭೇಟಿ ನೀಡಿ ಪರಿಶೀಲಿಸುತ್ತಿರುತ್ತಾರೆ.<br>4. ರಾಷ್ಟ್ರೀಯ ಮತ್ತು ರಾಜ್ಯ ಮಹಿಳಾ ಆಯೋಗದ ಅಧ್ಯಕ್ಷರುಗಳು ಹಾಗೂ ಸದಸ್ಯರುಗಳು ಕಾರಾಗೃಹಗಳಿಗೆ |

| | | |
|---|---|---|
| | | ಭೇಟಿ ನೀಡಿ ಪರಿಶೀಲಿಸುತ್ತಿರುತ್ತಾರೆ.<br><br>**ಕಾರಾಗೃಹಗಳಲ್ಲಿ ಈ ಕೆಳಗಿನಂತೆ ನಿಯಮಿತ ಪರಿಶೀಲನೆ ಕೈಗೊಳ್ಳಲಾಗುತ್ತಿರುತ್ತದೆ:**<br>1. ಕಾರಾಗೃಹ ಕೈಪಿಡಿಯನುಸಾರ ಹಾಗೂ ಸರ್ಕಾರದ ಆದೇಶಾನುಸಾರ, ಸಂಬಂಧಪಟ್ಟ ವ್ಯಾಪ್ತಿಯ ಕಾರಾಗೃಹಗಳ ಉಪಮಹಾನಿರೀಕ್ಷಕರು ನಿಯಮಿತವಾಗಿ ಕಾರಾಗೃಹಗಳ ಪರಿಶೀಲನೆ ಕೈಗೊಳ್ಳುತ್ತಿರುತ್ತಾರೆ.<br>2. ಕಾರಾಗೃಹಗಳ ಮುಖ್ಯ ಅಧೀಕ್ಷಕರು / ಅಧೀಕ್ಷಕರು ನಿಯಮಿತವಾಗಿ ಕಾರಾಗೃಹಗಳ ಪರಿಶೀಲನೆ ಕೈಗೊಳ್ಳುತ್ತಿರುತ್ತಾರೆ.<br>3. ಹಿರಿಯ ಅಧಿಕಾರಿಗಳು ಆಗಿಂದಾಗ್ಗೆ ಕಾರಾಗೃಹಗಳಿಗೆ ಭೇಟಿ ನೀಡಿ ನಿಯಮಿತವಾಗಿ ಪರಿಶೀಲನೆ ಕೈಗೊಳ್ಳುತ್ತಿರುತ್ತಾರೆ. |
| 3. | ಕಠಿಣ ಕುಂದುಕೊರತೆ ನಿವಾರಣಾ ವ್ಯವಸ್ಥೆ | **ಕರ್ನಾಟಕ ಕಾರಾಗೃಹ ಮತ್ತು ಸುಧಾರಣಾ ಸೇವಾ ಇಲಾಖೆಯಲ್ಲಿ ಸ್ವತಂತ್ರವಾಗಿ ಈ ಕೆಳಗಿನಂತೆ ಕುಂದುಕೊರತೆಗಳ ನಿವಾರಣಾ ವ್ಯವಸ್ಥೆ ಜಾರಿಯಲ್ಲಿರುತ್ತದೆ.**<br>1. ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ರವರ ಸಹಯೋಗದಲ್ಲಿ ಎಲ್ಲಾ ಕಾರಾಗೃಹಗಳಲ್ಲಿ ಬಂದಿಗಳು ಕುಂದುಕೊರತೆಗಳನ್ನು ಸಲ್ಲಿಸಲು ದೂರು ಪೆಟ್ಟಿಗೆಗಳನ್ನು ಅಳವಡಿಸಲಾಗಿರುತ್ತದೆ.<br>2. ಸದರಿ ದೂರು ಪೆಟ್ಟಿಗೆಗಳನ್ನು ಸ್ಥಳೀಯ ನ್ಯಾಯಾಧೀಶರುಗಳು ಕಾರಾಗೃಹಗಳಿಗೆ ಭೇಟಿ ನೀಡಿದಾಗ ದೂರುಗಳ ಕುರಿತು ಅಗತ್ಯ ಕ್ರಮಕೈಗೊಳ್ಳುತ್ತಿರುತ್ತಾರೆ.<br>3. ಸಂದರ್ಶಕರ ಮಂಡಳಿಗಳ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರುಗಳು ಕಾರಾಗೃಹಗಳಿಗೆ ಭೇಟಿ ನೀಡಿ ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಅಗತ್ಯ ಕ್ರಮ ಕೈಗೊಳ್ಳುತ್ತಿರುತ್ತಾರೆ.<br>4. ರಾಷ್ಟ್ರೀಯ ಮತ್ತು ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರುಗಳು ಹಾಗೂ ಸದಸ್ಯರುಗಳು ಕಾರಾಗೃಹಗಳಿಗೆ ಭೇಟಿ ನೀಡಿ ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಅಗತ್ಯ ಕ್ರಮ ಕೈಗೊಳ್ಳುತ್ತಿರುತ್ತಾರೆ.<br>5. ರಾಷ್ಟ್ರೀಯ ಮತ್ತು ರಾಜ್ಯ ಮಹಿಳಾ ಆಯೋಗದ |

| | | |
|---|---|---|
| | | ಅಧ್ಯಕ್ಷರುಗಳು ಹಾಗೂ ಸದಸ್ಯರುಗಳು ಕಾರಾಗೃಹಗಳಿಗೆ ಭೇಟಿ ನೀಡಿ ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಅಗತ್ಯ ಕ್ರಮ ಕೈಗೊಳ್ಳುತ್ತಿರುತ್ತಾರೆ.<br>**ಕರ್ನಾಟಕ ಕಾರಾಗೃಹ ಮತ್ತು ಸುಧಾರಣಾ ಸೇವಾ ಇಲಾಖೆಯಲ್ಲಿ ನಿಯಮಿತವಾಗಿ ಈ ಕೆಳಗಿನಂತೆ ಕುಂದುಕೊರತೆಗಳ ನಿವಾರಣಾ ವ್ಯವಸ್ಥೆ ಜಾರಿಯಲ್ಲಿರುತ್ತದೆ.**<br>1. ಕಾರಾಗೃಹಗಳ ಉಪಮಹಾನಿರೀಕ್ಷಕರುಗಳು ಅವರ ವ್ಯಾಪ್ತಿಯ ಕಾರಾಗೃಹಗಳಿಗೆ ಆಗಿಂದಾಗ್ಗೆ ಭೇಟಿ ನೀಡಿ ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಅಗತ್ಯ ಕ್ರಮ ಕೈಗೊಳ್ಳುತ್ತಿರುತ್ತಾರೆ.<br>2. ಕಾರಾಗೃಹಗಳ ಮುಖ್ಯ ಅಧೀಕ್ಷಕರು / ಅಧೀಕ್ಷಕರುಗಳು ಅವರ ವ್ಯಾಪ್ತಿಯ ಕಾರಾಗೃಹಗಳಿಗೆ ಆಗಿಂದಾಗ್ಗೆ ಭೇಟಿ ನೀಡಿ ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಅಗತ್ಯ ಕ್ರಮ ಕೈಗೊಳ್ಳುತ್ತಿರುತ್ತಾರೆ.<br>3. ಕಾರಾಗೃಹಗಳ ಹಿರಿಯ ಅಧಿಕಾರಿಗಳು. ಕಾರಾಗೃಹಗಳಿಗೆ ಆಗಿಂದಾಗ್ಗೆ ಭೇಟಿ ನೀಡಿ ಬಂದಿಗಳ ಕುಂದುಕೊರತೆಗಳನ್ನು ಆಲಿಸಿ ಅಗತ್ಯ ಕ್ರಮ ಕೈಗೊಳ್ಳುತ್ತಿರುತ್ತಾರೆ. |
| 4. | ಮಹಿಳೆಯರನ್ನು ಬಂಧಿಸಲು ವಿಶೇಷ ವಿಧಾನ ಮತ್ತು ಅವರ ತಪಾಸಣಾ ಸಮಯದಲ್ಲಿ ಘನತೆ ಮತ್ತು ಗೌಪ್ಯತೆ. | – ಕಾರಾಗೃಹ ಮತ್ತು ಸುಧಾರಣಾ ಸೇವೆ ಇಲಾಖೆಗೆ ಅನ್ವಯಿಸುವುದಿಲ್ಲ. |
| 5. | ಗರ್ಭಿಣಿ ಮಹಿಳಾ ಬಂಧಿಗಳಿಗೆ ವಿಶೇಷ ಸೌಲಭ್ಯ ಮತ್ತು ಬಾಣಂತಿಯರಿಗೆ ಸೂಕ್ತ ವಸತಿ ವ್ಯವಸ್ಥೆ | **ಗೌ॥ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:559/1994 ರ ನಿರ್ದೇಶಾನುಸಾರ ಕಾರಾಗೃಹ ನಿಯಮಗಳು ಮತ್ತು ಕಾರಾಗೃಹ ಕೈಪಿಡಿಗೆ ಸೂಕ್ತ ತಿದ್ದುಪಡಿ ಮಾಡಲಾಗಿದ್ದು, ಅದರನ್ವಯ ಗರ್ಭಿಣೆ ಮತ್ತು ಬಾಣಂತಿ ಮಹಿಳಾ ಬಂಧಿಗಳಿಗೆ ಹಾಗೂ ತಾಯಿಯೊಂದಿಗೆ ಇರುವ 6 ವರ್ಷದೊಳಗಿನ ಮಕ್ಕಳಿಗೆ ಕೆಳಗಿನಂತೆ ವಿಶೇಷ ಸೌಲಭ್ಯಗಳನ್ನು ಕಲ್ಪಿಸಲಾಗಿರುತ್ತದೆ:**<br>1. ಗರ್ಭಿಣಿ ಮತ್ತು ಬಾಣಂತಿ ಮಹಿಳಾ ಬಂಧಿಗಳಿಗೆ ಹಾಗೂ ಮಹಿಳಾ ಬಂಧಿಗಳೊಂದಿಗಿರುವ 6 ವರ್ಷದೊಳಗಿನ ಮಕ್ಕಳಿಗೆ ವಿಶೇಷ ಪೌಷ್ಠಿಕ ಆಹಾರ ಸೌಲಭ್ಯ. |

| | | |
|---|---|---|
| | | 2. ಸದರಿಯವರಿಗೆ ಅವಶ್ಯಕ ಹಾಸಿಗೆ ಹೊದಿಕೆ, ಉಡುಪು ಮತ್ತು ಪಾತ್ರೆಗಳ ವ್ಯವಸ್ಥೆ.<br>3. ಸ್ತ್ರೀ ರೋಗ ತಜ್ಞರಿಂದ ಹಾಗೂ ಮಕ್ಕಳ ತಜ್ಞರಿಂದ ಸೂಕ್ತ ವೈದ್ಯಕೀಯ ತಪಾಸಣೆ ಮತ್ತು ಅವಶ್ಯಕ ವೈದ್ಯೋಪಚಾರ. |
| 6. | ಮಹಿಳಾ ಬಂಧಿಗಳ ಮಕ್ಕಳಿಗೆ ಆರೈಕೆ ಅವಧಿಯ ನಂತರ ಪುನರ್ ಸೇರುವಿಕೆಯ ಕಾರ್ಯಕ್ರಮಗಳು; | **ಮಹಿಳಾ ಬಂಧಿಗಳ ಮಕ್ಕಳಿಗೆ ಆರೈಕೆ ಅವಧಿಯ ನಂತರ ಪುನರ್ ಸೇರುವಿಕೆಯ ಕಾರ್ಯಕ್ರಮಗಳು ಈ ಕೆಳಗಿನಂತಿರುತ್ತದೆ:**<br>1. ಕರ್ನಾಟಕ ಕಾರಾಗೃಹಗಳ ಕೈಪಿಡಿ ಅನ್ವಯ 6 ವರ್ಷದೊಳಗಿನ ಮಕ್ಕಳನ್ನು ಮಹಿಳಾ ಬಂಧಿಗಳೊಂದಿಗೆ ಕಾರಾಗೃಹಗಳಲ್ಲಿ ಇರಿಸಿಕೊಳ್ಳಲು ಅವಕಾಶ ನೀಡಲಾಗುತ್ತಿರುತ್ತದೆ.<br>2. ಆರು ವರ್ಷಗಳ ನಂತರ ತಾಯಿಯ ಸಹಮತಿ ಪಡೆದು, ಪೋಷಕರ ವಶಕ್ಕೆ ನೀಡಲಾಗುವುದು.<br>3. ಪೋಷಕರು ಇಲ್ಲದಿದ್ದಾಗ ತಾಯಿಯ ಸಹಮತಿಯೊಂದಿಗೆ ಅಧಿಕೃತ ವಸತಿ ಶಾಲೆಗಳಿಗೆ ಸೇರಿಸಲಾಗುತ್ತಿರುತ್ತದೆ. |
| 7. | ಬಂಧಿಗಳ ಮಾನಸಿಕ ಸ್ವಾಸ್ಥ್ಯ ಹೆಚ್ಚಿಸುವ ಬಗ್ಗೆ | **ಬಂಧಿಗಳ ಮಾನಸಿಕ ಸ್ವಾಸ್ಥ್ಯ ಹೆಚ್ಚಿಸುವ ಸಂಬಂಧ ಈ ಕೆಳಗಿನಂತೆ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ:**<br>1. ಕಾರಾಗೃಹಗಳಲ್ಲಿ ಇರುವಂತಹ ಮನೋವೈದ್ಯರುಗಳಿಂದ ಹಾಗೂ ಇಲ್ಲದೇ ಇರುವ ಕಡೆ ಸರ್ಕಾರಿ ಜಿಲ್ಲಾ / ತಾಲ್ಲೂಕು ಆಸ್ಪತ್ರೆಗಳಲ್ಲಿರುವ ಮನೋವೈದ್ಯರುಗಳಿಂದ ಬಂಧಿಗಳಿಗೆ ಅಗತ್ಯ ಸಮಾಲೋಚನೆ ಹಾಗೂ ಅವಶ್ಯಕ ಚಿಕಿತ್ಸೆಯನ್ನು ನೀಡಲಾಗುತ್ತಿರುತ್ತದೆ.<br>2. ಬಂದಿಗಳಿಗೆ ಹೆಚ್ಚಿನ ಚಿಕಿತ್ಸೆ ಅವಶ್ಯಕತೆ ಇದ್ದಲ್ಲಿ ನಿಮ್ಹಾನ್ಸ್, ಬೆಂಗಳೂರು / ಡಿಮ್ಹಾನ್ಸ್, ಧಾರವಾಡ ಆಸ್ಪತ್ರೆಗಳಿಗೆ ಕಳುಹಿಸಿ ಮಾನಸಿಕ ಚಿಕಿತ್ಸೆಯನ್ನು ಒದಗಿಸಲಾಗುತ್ತಿರುತ್ತದೆ.<br>3. ಸರ್ಕಾರೇತರ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ಬಂದಿಗಳಿಗೆ ದೈಹಿಕ ಹಾಗೂ ಮಾನಸಿಕ ಆರೋಗ್ಯ ತಪಾಸಣಾ ಶಿಬಿರಗಳನ್ನು ಕಾರಾಗೃಹಗಳಲ್ಲಿ ಆಯೋಜಿಸಲಾಗುತ್ತಿರುತ್ತದೆ. |

| | | |
|---|---|---|
| | | 4. ಸರ್ಕಾರೇತರ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ವಿವಿಧ ಮನಃ ಪರಿವರ್ತನಾ ಕಾರ್ಯಕ್ರಮಗಳಾದ ಯೋಗ, ಧ್ಯಾನ, ಆಪ್ತ ಸಮಾಲೋಚನೆ, ಕಲೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕಾರಾಗೃಹಗಳಲ್ಲಿ ಆಯೋಜಿಸಲಾಗುತ್ತಿರುತ್ತದೆ. |
| 8. | ಉಚಿತ ಕಾನೂನು ನೆರವು ಸೇವೆಯನ್ನು ಸುಧಾರಿಸುವ ಬಗ್ಗೆ | **ಕಾರಾಗೃಹಗಳಲ್ಲಿ ಉಚಿತ ಕಾನೂನು ನೆರವು ಸೇವೆಗಳನ್ನು ಈ ಕೆಳಕಂಡಂತೆ ಒದಗಿಸಲಾಗುತ್ತಿರುತ್ತದೆ:**<br>1. ಕಾರಾಗೃಹಗಳಲ್ಲಿ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ರವರ ವತಿಯಿಂದ "ಕಾನೂನು ನೆರವು ಕೇಂದ್ರ"ಗಳನ್ನು ಸ್ಥಾಪಿಸಲಾಗಿರುತ್ತದೆ.<br>2. ಕಾನೂನು ಸೇವೆಗಳ ಪ್ರಾಧಿಕಾರದ ವತಿಯಿಂದ ನೇಮಿಸಲ್ಪಟ್ಟ ವಕೀಲರುಗಳು ಕಾರಾಗೃಹಗಳಿಗೆ ನಿಯಮಿತವಾಗಿ ಭೇಟಿ ನೀಡಿ, ಬಂಧಿಗಳಿಗೆ ಉಚಿತ ಕಾನೂನು ನೆರವನ್ನು ನೀಡುತ್ತಿರುತ್ತಾರೆ.<br>3. ಬಂಧಿಗಳಿಗೆ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರದ ವತಿಯಿಂದ ಅವಶ್ಯಕ ಕಾನೂನು ನೆರವು ಮತ್ತು ಅರಿವನ್ನು ಸಹಾ ನೀಡಲಾಗುತ್ತಿರುತ್ತದೆ. |
| 9. | ಕಾರಾಗೃಹಗಳಲ್ಲಿ ಉತ್ತಮ ನೈರ್ಮಲ್ಯತೆ, ಆರೋಗ್ಯ ಮತ್ತು ಸ್ವಚ್ಛತೆ ಬಗ್ಗೆ | **ಕಾರಾಗೃಹಗಳಲ್ಲಿ ಉತ್ತಮ ನೈರ್ಮಲ್ಯತೆ, ಆರೋಗ್ಯ ಮತ್ತು ಸ್ವಚ್ಛತೆಯನ್ನು ಈ ಕೆಳಗಿನಂತೆ ನಿರ್ವಹಿಸಲಾಗುತ್ತಿರುತ್ತದೆ:**<br>1. ಕಾರಾಗೃಹಗಳಲ್ಲಿ ದಿನನಿತ್ಯ ಸ್ವಚ್ಛತೆ ಮತ್ತು ನೈರ್ಮಲ್ಯತೆಗೆ ಆಧ್ಯತೆ ನೀಡಲಾಗುತ್ತಿರುತ್ತದೆ.<br>2. ಕಾರಾಗೃಹಗಳಲ್ಲಿ ಬಂದಿಗಳಿಗೆ ಅವಶ್ಯಕ ವೈದ್ಯಕೀಯ ಸೌಲಭ್ಯಗಳನ್ನು ಮತ್ತು ಚಿಕಿತ್ಸೆಯನ್ನು ಒದಗಿಸಲಾಗುತ್ತಿರುತ್ತದೆ.<br>3. ಬಂದಿಗಳಿಗೆ ಹೆಚ್ಚಿನ ಚಿಕಿತ್ಸೆ ಅವಶ್ಯಕವಿದ್ದಲ್ಲಿ ಹೊರ ಹಾಗೂ ಉನ್ನತ ಆಸ್ಪತ್ರೆಗಳಲ್ಲಿ ಚಿಕಿತ್ಸೆಯನ್ನು ಒದಗಿಸಲಾಗುತ್ತಿರುತ್ತದೆ.<br>4. ಗೌ॥ ಸರ್ವೋಚ್ಚ ನ್ಯಾಯಾಲಯದ ಆದೇಶಾನುಸಾರ, ಕೇಂದ್ರ / ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಇಲಾಖೆ ಮತ್ತು ಕೇಂದ್ರ ಗೃಹ ಮಂತ್ರಾಲಯದ / ರಾಜ್ಯ ಸರ್ಕಾರದ ಮಾರ್ಗಸೂಚಿಗಳನ್ವಯ ಕಾರಾಗೃಹಗಳಲ್ಲಿ ಕೋವಿಡ್-19 ಸಾಂಕ್ರಾಮಿಕ ಸೋಂಕು ಹರಡದಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿರುತ್ತದೆ. |

| | | |
|---|---|---|
| 10. | ಬಂಧಿಗಳ ಶಿಕ್ಷಣ, ಕೌಶಲ್ಯ ಮತ್ತು ಮತದಾನದ ಹಕ್ಕು | **ಬಂಧಿಗಳ ಶಿಕ್ಷಣ, ಕೌಶಲ್ಯ ಮತ್ತು ಮತದಾನದ ಹಕ್ಕುಗಳ ಕುರಿತು ವಿವರ ಕೆಳಕಂಡಂತಿರುತ್ತದೆ:**<br>1. ಬಂಧಿಗಳಿಗೆ ಕರ್ನಾಟಕ ರಾಜ್ಯ ಮುಕ್ತ ವಿಶ್ವ ವಿದ್ಯಾನಿಲಯ ಮತ್ತು ಇಂದಿರಾಗಾಂಧಿ ಮುಕ್ತ ವಿಶ್ವ ವಿದ್ಯಾನಿಲಯಗಳ ವತಿಯಿಂದ ಉನ್ನತ ಶಿಕ್ಷಣ ಪಡೆಯಲು ಅವಕಾಶವನ್ನು ಕಲ್ಪಿಸಲಾಗಿರುತ್ತದೆ.<br>2. ಬಂಧಿಗಳ ಕೌಶಲ್ಯಾಭಿವೃದ್ಧಿ ಹೆಚ್ಚಿಸಲು ವಿವಿಧ ಕೌಶಲ್ಯ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿರುತ್ತದೆ.<br>3. "The Representation of The People Act, 1951" ರ ಅನ್ವಯ ಬಂಧಿಗಳಿಗೆ ಮತದಾನದ ಹಕ್ಕು ಇರುವುದಿಲ್ಲ. |
| 11. | ವಿಚಾರಣಾ ಬಂಧಿಗಳ ತ್ವರಿತ ಬಿಡುಗಡೆ ಇತ್ಯಾಧಿ | **ಕಾರಾಗೃಹಗಳಲ್ಲಿ ವಿಚಾರಣಾ ಬಂಧಿಗಳ ತ್ವರಿತ ಬಿಡುಗಡೆ ಕ್ರಮಗಳ ವಿವರ:**<br>1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ 'ವಿಚಾರಣಾ ಬಂದಿಗಳ ಪರಿಶೀಲನಾ ಸಮಿತಿ'ಯು, ವಿಚಾರಣಾ ಬಂದಿಗಳ ಬಿಡುಗಡೆ ಮಾಡುವ ಕುರಿತು ನಿಯಮಿತವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ.<br>2. ಗೌ॥ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 6690/2020 ಆದೇಶದನ್ವಯ ವಿಚಾರಣಾ ಬಂಧಿಗಳಿಗೆ 'ಇ-ಫೈಲಿಂಗ್' ಮೂಲಕ ಜಾಮೀನು ಪಡೆಯಲು ಅವಕಾಶವನ್ನು ಕಲ್ಪಿಸಲಾಗಿರುತ್ತದೆ.<br>3. ವಿಚಾರಣಾ ಬಂಧಿಗಳ ಮೊಕದ್ದಮೆಗಳನ್ನು ತ್ವರಿತವಾಗಿ ವಿಲೇವಾರಿ ಮಾಡಲು 'ವಿಡಿಯೋ ಕಾನ್ಫಿರೆನ್ಸಿಂಗ್' ಮುಖಾಂತರ ನ್ಯಾಯಾಲಯಗಳಿಗೆ ಬಂದಿಗಳನ್ನು ವಿಚಾರಣೆಗೆ ಹಾಜರುಪಡಿಸಲಾಗುತ್ತಿರುತ್ತದೆ.<br>4. ಗೌ॥ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 01/2020 ರಲ್ಲಿನ ನಿರ್ದೇಶನದನುಸಾರ, ಗೌ॥ ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಹಾಗೂ ಅಧ್ಯಕ್ಷರು, ಕರ್ನಾಟಕ ರಾಜ್ಯ ಕಾನೂನು ಸೇವೆಗಳ |

| | | |
|---|---|---|
| | | 5. ಪ್ರಾಧಿಕಾರ ರವರ ಅಧ್ಯಕ್ಷತೆಯಲ್ಲಿ, ರಾಜ್ಯ ಮಟ್ಟದ 'ಉನ್ನತ ಸಮಿತಿಯನ್ನು (High Power Committee)' ರಚಿಸಲಾಗಿದ್ದು, ಬಂಧಿಗಳನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡುವ ಸಂಬಂಧ ಮೇಲ್ವಿಚಾರಣೆಯನ್ನು ನಡೆಸಲಾಗುತ್ತಿರುತ್ತದೆ. |

(ಎಸ್. ಸುರೇಶ್ ಬಾಬು)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)